# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಮೇ ೨೮, ೨೦೧೫ (ಜ್ಯೇಷ್ಠ ೭, ಶಕ ವರ್ಷ ೧೯೩೭)<br>Bengaluru, Thursday, May 28, 2015 (Jyeishta 7, Shaka Varsha 1937) | ಸಂಚಿಕೆ ೨೨<br>Issue 22 |
|---|---|---|


## ಭಾಗ ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಸಂಖ್ಯೆ : ಕೆ.ಎಸ್.ಎ/ಸಿಆರ್/64/14–15 ಬೆಂಗಳೂರು ದಿನಾಂಕ: 13–02–2015**

**ಕೊಳಚೆ ಪ್ರದೇಶ ಸ್ಥಳಾಂತರಿಕೆ ಉದ್ದೇಶದ ಅಧಿಸೂಚನೆ**

**(ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಕಲಂ 11 ರಡಿ)**

ಬೆಂಗಳೂರು ನಗರ,. ಪುಲಕೇಶಿನಗರ ವಿಧಾನ ಸಭಾ ಕ್ಷೇತ್ರದ ಕಾವಲ್‌ಭೈರಸಂದ್ರ ಬಿ.ಬಿ.ಎಂ.ಪಿ ಕಛೇರಿಯ ಹಿಂಭಾಗದ ರೈಲ್ವೆ ಜಮೀನಿನಲ್ಲಿರುವ ಅಲೆಮಾರಿ ಕೊಳಚೆ ಪ್ರದೇಶವನ್ನು ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಪ್ರದೇಶದಲ್ಲಿ 232 ಕುಟುಂಬಗಳು ವಾಸಿಸುತ್ತಿರುವ ಕೊಳಚೆ ಪ್ರದೇಶ ಅತ್ಯಂತ ಅನಾರೋಗ್ಯ ಮತ್ತು ಮಾಲೀನ್ಯದಿಂದ ಕೊಡಿದ್ದು ಮೂಲಭೂತ ಸೌಕರ್ಯಗಳಾದ ಕುಡಿಯುವ ನೀರು, ಬೀದಿ ದೀಪ, ಚರಂಡಿ, ರಸ್ತೆ, ಶೌಚಾಲಯ ಇತ್ಯಾದಿಗಳಿಂದ ವಂಚಿತರಾಗಿರುತ್ತದೆ. ಈ ಪ್ರದೇಶವನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಸಹಾಯಕ ಕಾರ್ಯಪಾಲಕ ಅಭಿಯಂತರರು ನಂ. 4ನೇ ಉಪವಿಭಾಗ ರವರು ದಿನಾಂಕ: 29–04–2014 ರಂದು ಸ್ಥಳ ತನಿಖೆ ಮಾಡಿದ್ದು, ಈ ಸ್ಥಳ ತನಿಖಾ ಸಮಯದಲ್ಲಿ 0–36.08 ಗುಂಟೆ ಪ್ರದೇಶದಲ್ಲಿ 1300 ಜನ ಸಂಖ್ಯೆಯ 232 ಕುಟುಂಬಗಳು ಗುಡಿಸಲುಗಳು ಹಾಕಿಕೊಂಡು ವಾಸಿಸುತ್ತಿದ್ದು, ಈ ಪ್ರದೇಶದ ಮಾಲೀಕತ್ವವು ರೈಲ್ವೆ ಇಲಾಖೆಗೆ ಸಂಬಂಧಿಸಿರುತ್ತದೆಂದು ಆಯುಕ್ತರು, ಕರ್ನಾಟಕ ಕೊಳಗೇರಿ ಮಂಡಳಿ, ಬೆಂಗಳೂರು ರವರು ಪತ್ರ ಸಂಖ್ಯೆ/ಕಕೊಅಮ/ಕಂ–1/ಆರ್–2/14/ಪುಲಕೇಶಿನಗರ/2014–15/870, ದಿನಾಂಕ: 30–1–2015 ರಂತೆ ವರದಿಯನ್ನು ಸಲ್ಲಿಸಿರುತ್ತಾರೆ. ಅಂತೆಯೇ ಸದರಿ ಕೊಳಚೆ ಪ್ರದೇಶವನ್ನು ಈ ಜಾಗದಿಂದ ಬೇರೆಡೆಗೆ ಸ್ಥಳಾಂತರಿಸುವ ಸಂಬಂಧ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಕಲಂ 11ರಡಿ ಕೊಳಚೆ ಪ್ರದೇಶದ ಸ್ಥಳಾಂತರಿಸುವಿಕೆಯ ಉದ್ದೇಶಕ್ಕಾಗಿ ಅಧಿಸೂಚನೆ ಹೊರಡಿಸಲು ದಾಖಲೆಗಳೊಂದಿಗೆ ವರದಿಯನ್ನು ಸಲ್ಲಿಸಿರುತ್ತಾರೆ. ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರ ಆದೇಶ ಸಂ.ಎಲ್‌ಎನ್.ಡಿ (ಎನ್‌ಎ)/ಸಿಆರ್/94/14–15, ದಿನಾಂಕ: 30–01–2015 ರಂತೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ, ಹೋಬಳಿ, ಮಾದಪ್ಪನಹಳ್ಳಿ ಗ್ರಾಮದ ಸ.ನಂ. 57ರಲ್ಲಿ 5–00 ಎಕರೆ ಜಮೀನನ್ನು ರೈಲ್ವೆ ಇಲಾಖೆಯಿಂದ ತೆರವುಗೊಳಿಸಿದ ಮತ್ತು ಬಲಜಿಗರ ಕೊಳಚೆ ಪ್ರದೇಶಗಳನ್ನು ಸ್ಥಳಾಂತರಿಸಿ ಪುನರ್ವಸತಿ ಕಲ್ಪಿಸಲು ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71 ರಡಿ ಸರ್ಕಾರದ ಘಟನೋತ್ತರ ಮಂಜೂರಾತಿ ನೀರಿಕ್ಷಿಸಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಬೆಂಗಳೂರು ಇವರಿಗೆ ಷರತ್ತು ವಿಧಿಸಿ ತಾತ್ಕಾಲಿಕವಾಗಿ ಕಾಯ್ದಿರಿಸಿ ಆದೇಶಿಸಲಾಗಿದೆ. ಆದ್ದರಿಂದ ಈ ಕೊಳಚೆ ಪ್ರದೇಶದ 232 ಕುಟುಂಬಗಳನ್ನು ಸ್ಥಳಾಂತರಿಸುವ ಬಗ್ಗೆ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಕಲಂ 11ರಡಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡು ಬಂದಿರುತ್ತದೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಕಲಂ 11 ರಡಿ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಈ ಪ್ರದೇಶದ ನಿವಾಸಿಗಳನ್ನು ಕೇವಲ ಸ್ಥಳಾಂತರಿಸುವ ಉದ್ದೇಶಕ್ಕೆ ಕೊಳಚೆ ಪ್ರದೇಶವೆಂದು ಈ ಮೂಲಕ ಘೋಷಿಸಲಾಗಿದೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ, ಶೇಷಾದ್ರಿಪುರ, ಬೆಂಗಳೂರು–20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಗಣಿಸಲಾಗುವುದಿಲ್ಲ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದ ಮಾಲೀಕತ್ವದ ವಿವರ | ಸ. ನಂ. | ವಿಸ್ತೀರ್ಣ | ಚೆಕ್ಕುಬಂದಿ | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1) | ಕಾವಲ್ ಭೈರಸಂದ್ರ ಬಿ.ಬಿ.ಎಂ.ಪಿ. ಕಛೇರಿಯ ಹಿಂಭಾಗದ ರೈಲ್ವೆ ಜಮೀನಿನಲ್ಲಿರುವ ಅಲೆಮಾರಿ ಕೊಳಚೆ ಪ್ರದೇಶ | ರೈಲ್ವೆ ಇಲಾಖೆ | – | 0–36.08 ಗುಂಟೆ | ರೈಲ್ವೆ ಜಾಗ | ರೈಲ್ವೆ ಜಾಗ | ರೈಲ್ವೆ ಜಾಗ | ಬಿ.ಬಿ.ಎಂ.ಪಿ. ಪಾರ್ಕ್ ಮತ್ತು ಕಛೇರಿ ಹಾಗೂ ರೈಲ್ವೆ ಕಾಂಪೌಂಡ್ |

**ವಿ. ಶಂಕರ್,**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

**PR-36**
**SC-50**

## ಕಂದಾಯ ಸಚಿವಾಲಯ

### ತಿದ್ದುಪಡಿ ಅಧಿಸೂಚನೆ

**ಭೂಸ್ವಾಧೀನ ಕಾಯ್ದೆ ಕಲಂ 6(1) ತಿದ್ದುಪಡಿ ಅಧಿಸೂಚನೆಯ ಕ್ರಮಾಂಕ : ಕಂಇ 12 ಭೂಸ್ವಾಗ್ರಾ : 2015, ದಿನಾಂಕ : 21–01–2015.**

ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು, ಕಸಬಾ ಹೋಬಳಿ, ರಾಯಸಂದ್ರ ಗ್ರಾಮದಲ್ಲಿ 249–33 1/2 ಎಕರೆ ಜಮೀನನ್ನು ಮಂಡಳಿ ವಸತಿ ಯೋಜನೆಗೆ ಭೂಸ್ವಾಧೀನಪಡಿಸಿಕೊಳ್ಳಲು ಭೂಸ್ವಾಧೀನ ಕಾಯ್ದೆ ಕಲಂ 6(1)ರನ್ವಯ ಹೊರಡಿಸಲಾದ ಕ್ರಮಾಂಕ ಕಂಇ 23 ಭೂಸ್ವಾಬೆ 2012, ದಿನಾಂಕ : 17–09–2012ರಲ್ಲಿ ಅಧಿಸೂಚನೆಯನ್ನು ಹೊರಡಿಸಿ ದಿನಾಂಕ : 27–09–2012ರ ರಾಜ್ಯ ಪತ್ರದ ಭಾಗ–6ರಲ್ಲಿ ಪುಟ ಸಂಖ್ಯೆ 829 ರಿಂದ 851 ರಲ್ಲಿ ಪ್ರಕಟಗೊಂಡಿರುವುದು ಸರಿಯಷ್ಟೆ ಸದರಿ ಪರಿವಿಡಿಯಲ್ಲಿ ವಿವರಿಸಲ್ಪಟ್ಟಿರುವ ಜಮೀನುಗಳ ಪೈಕಿ ಸರ್ವೆ ನಂ. 36/2ರಲ್ಲಿ 3–05 ಎಕರೆ ವಿಸ್ತೀರ್ಣವನ್ನು ಅಧಿಸೂಚಿಸಿರುತ್ತದೆ. ಆದರೆ ಈ ನಂಬರ್ ಉಪ ಪೋಡುಗಳಾಗಿದ್ದು, ಅವುಗಳನ್ನು ಸಹ ಅಧಿಸೂಚಿಸಿದ್ದು ದುಬಾರಿ ವಿಸ್ತೀರ್ಣವಾಗಿರುತ್ತದೆ ಆದುದರಿಂದ ಒಟ್ಟು ವಿಸ್ತೀರ್ಣದಲ್ಲಿ ದುಬಾರಿ ವಿಸ್ತೀರ್ಣವನ್ನು ಕಡಿತಗೊಳಿಸಿ ಕೆಳಕಂಡಂತೆ ತಿದ್ದುಪಡಿ ಮಾಡಿ ಸಾರ್ವಜನಿಕರ ತಿಳುವಳಿಕೆಗೆ ಪ್ರಕಟಿಸಿದೆ.

**ಪರಿವಿಡಿ**

**ರಾಮನಗರ ಜಿಲ್ಲೆ ತಾಲ್ಲೂಕು : ಕನಕಪುರ ಹೋಬಳಿ : ಕಸಬಾ ಗ್ರಾಮ ರಾಯಸಂದ್ರ**

| ಕಲಂ 6(1)ರಲ್ಲಿ ಪ್ರಕಟಣೆಯಾಗಿರುವುದು | | | | | | ತಿದ್ದುಪಡಿ ಮಾಡಿರುವುದು | | | | |
|---|---|---|---|---|---|---|---|---|---|---|
| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂಬರ್ | ವಿಸ್ತೀರ್ಣ | | ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂಬರ್ | ವಿಸ್ತೀರ್ಣ |
| 42 | ದುರ್ಗೇಗೌಡ ಬಿನ್ ಹೊಂಬಾಳೆಗೌಡ, ಸುವರ್ಣಮ್ಮ ಕೋಂ ಜಯರಾಮು, ಜಯರಾಮು ಬಿನ್ ದುರ್ಗೇಗೌಡ ಉ॥ ಕುಳ್ಳೇಗೌಡ, ಚಿನ್ನಮಾರೇಗೌಡ ಬಿನ್ ದುರ್ಗೇಗೌಡ ಉ॥ ಕುಳ್ಳೇಗೌಡ, ಜಯಮ್ಮ ಬಿನ್ ದುರ್ಗೇಗೌಡ ಉ॥ ಕುಳ್ಳೇಗೌಡ | ದುರ್ಗೇಗೌಡ, ಸುವರ್ಣಮ್ಮ, ಜಯರಾಮು, ಚಿನ್ನಮಾರೇಗೌಡ, ಜಯಮ್ಮ | 36/2 | 3–05 0–001 (ಖ) | | 42 | ಜಯಮ್ಮ ಬಿನ್ ದುರ್ಗೇಗೌಡ ಉ॥ ಕುಳ್ಳೇಗೌಡ | ಜಯಮ್ಮ ಬಿನ್ ದುರ್ಗೇಗೌಡ ಉ॥ ಕುಳ್ಳೇಗೌಡ | 36/2 | 0–12 |

ಘೋಷ್ವಾರೆ

| ಕಲಂ 6(1)ರಲ್ಲಿ ಪ್ರಕಟಣೆಯಾಗಿರುವುದು | | | ತಿದ್ದುಪಡಿ ಮಾಡಿರುವುದು | |
|---|---|---|---|---|
| | ವಿಸ್ತೀರ್ಣ ಎ–ಗುಂ | | | ವಿಸ್ತೀರ್ಣ ಎ–ಗುಂ |
| ಒಟ್ಟು | 249–33 1/2 | | ಒಟ್ಟು | 247–00 1/2 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 40

S.C. 25

ಲಲಿತಾ ಹೆಚ್. ಹಂದಿಗೋಳ

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾಧೀನ–2 ಮತ್ತು ಪುನರ್ವಸತಿ).

## ವಿಶೇಷ ಭೂಸ್ವಾಧೀನಾಧಿಕಾರಿ, ರಾಮನಗರ ಉಪ ವಿಭಾಗ, ರಾಮನಗರ

### ಸೆಕ್ಷನ್ 16(2)ರ ಅನ್ವಯ ಅಧಿಸೂಚನೆ

### ಕ್ರಮಾಂಕ : ಎಲ್‌ಎಕ್ಯೂ.ಎಸ್‌ಆರ್: 74/11-12, ದಿನಾಂಕ: 27–09–2013.

ರಾಜ್ಯ ಸರ್ಕಾರದ ಭೂ ಸ್ವಾಧೀನ ಕಾಯ್ದೆ 1894 ಕಲಂ 16ರ ಪ್ರಕರಣ (2) ಉಪ ಪ್ರಕರಣದ ಮೇರೆಗೆ ಈ ಮುಂದಿನ ಅನುಸೂಚಿಯಲ್ಲಿ ಸೂಚಿಸಿರುವ ಜಮೀನುಗಳನ್ನು ಕನಕಪುರ ಟೌನ್‌ನಲ್ಲಿ ಹೈಟೆಕ್ ಕೆ.ಎಸ್.ಆರ್.ಟಿ.ಸಿ. ಬಸ್‌ನಿಲ್ದಾಣ ನಿರ್ಮಿಸಲು ಭೂಸ್ವಾಧೀನಪಡಿಸಿಕೊಂಡಿದ್ದು ಸದರಿ ಜಮೀನುಗಳನ್ನು ಅಧಿಕೃತವಾಗಿ ವಶಪಡಿಸಿಕೊಂಡು ಈ ಅಧಿಸೂಚನೆ ಹೊರಡಿಸಲಾಗಿದೆ.

ಅನುಸೂಚಿ

ಜಿಲ್ಲೆ : ರಾಮನಗರ ತಾಲ್ಲೂಕು : ಕನಕಪುರ

ಹೋಬಳಿ : ಕಸಬಾ ಗ್ರಾಮ : ಕನಕಪುರ

| ಕ್ರ. ಸಂ. | ಖಾನೇಷುಮಾರಿ ನಂಬರ್ | ತರಹೆ | ವಿಸ್ತೀರ್ಣ ಚ.ಅಡಿಗಳಲ್ಲಿ | ಭೂಸ್ವಾಧೀನಪಡಿಸಿಕೊಂಡ ದಿನಾಂಕ : |
|---|---|---|---|---|
| 1 | 2 | 3 | 4 | 5 |
| 1 | ಖಾ.ನಂ. 11857 | ಭೂ ಪರಿವರ್ತಿತ | 72797.95 ಚ.ಅಡಿ | 27–09–2013 |

P.R. 41

S.C. 10

ಪಿ. ಜಯಮಾಧವ

ವಿಶೇಷ ಭೂಸ್ವಾಧೀನಾಧಿಕಾರಿ,

ರಾಮನಗರ ಉಪ ವಿಭಾಗ, ರಾಮನಗರ.

## ವಿಶೇಷ ಭೂಸ್ವಾಧೀನಾಧಿಕಾರಿ, ರಾಮನಗರ ಉಪ ವಿಭಾಗ, ರಾಮನಗರ

### ಸೆಕ್ಷನ್ 16(2)ರ ಅನ್ವಯ ಅಧಿಸೂಚನೆ

### ಕ್ರಮಾಂಕ : ಎಲ್‌ಎಕ್ಯೂ.ಎಸ್‌ಆರ್: 01/2010-11, ದಿನಾಂಕ: 20–06–2011.

ರಾಜ್ಯ ಸರ್ಕಾರದ ಭೂ ಸ್ವಾಧೀನ ಕಾಯ್ದೆ ಕಲಂ 16ರ ಪ್ರಕರಣ (2) ಉಪ ಪ್ರಕರಣದ ಮೇರೆಗೆ ಈ ಮುಂದಿನ ಅನುಸೂಚಿಯಲ್ಲಿ ಸೂಚಿಸಿರುವ ಜಮೀನುಗಳನ್ನು ಬೆಂಗಳೂರು–ಮೈಸೂರು ನಡುವೆ ಎರಡು ಪಥದ ಜೋಡಿ ರೈಲ್ವೆ ನಿರ್ಮಾಣ ಉದ್ದೇಶಕ್ಕಾಗಿ ಜಮೀನು ಭೂಸ್ವಾಧೀನವಾಗಿದ್ದು ಸದರಿ ಜಮೀನನ್ನು ಅಧಿಕೃತವಾಗಿ ವಶಪಡಿಸಿಕೊಂಡು ಈ ಅಧಿಸೂಚನೆ ಹೊರಡಿಸಲಾಗಿದೆ.

ಅನುಸೂಚಿ

ಜಿಲ್ಲೆ : ರಾಮನಗರ ತಾಲ್ಲೂಕು : ಚನ್ನಪಟ್ಟಣ

ಹೋಬಳಿ : ಮಳೂರು ಗ್ರಾಮ : ಶೆಟ್ಟಿಹಳ್ಳಿ ಗ್ರಾಮಠಾಣ

| ಕ್ರ. ಸಂ. | ಖಾತಾ ನಂಬರ್ | ತರಹೆ | ವಿಸ್ತೀರ್ಣ ಚ.ಅಡಿಗಳಲ್ಲಿ | ಭೂಸ್ವಾಧೀನಪಡಿಸಿಕೊಂಡ ದಿನಾಂಕ : |
|---|---|---|---|---|
| 1 | 2 | 3 | 4 | 5 |
| 1 | 114 | ಸೈಟು | 2400 | 20–06–2011 |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| ಕ್ರ. ಸಂ. | ಖಾತಾ ನಂಬರ್ | ತರಹೆ | ವಿಸ್ತೀರ್ಣ ಚ.ಅಡಿಗಳಲ್ಲಿ | ಭೂಸ್ವಾಧೀನಪಡಿಸಿಕೊಂಡ ದಿನಾಂಕ : |
|---|---|---|---|---|
| **1** | **2** | **3** | **4** | **5** |
| 2 | 115 | ಖಾಲಿಜಾಗ | 2092–75 | 20–06–2011 |
| 3 | 116/1 | ಕಟ್ಟಡ | 352 | 20–06–2011 |
| 4 | 116/2 | ಕಟ್ಟಡ | 722 | 20–06–2011 |
| 5 | 117 | ಖಾಲಿಜಾಗ | 1508 | 20–06–2011 |
| 6 | 118/1 | ಕಟ್ಟಡ | 1620 | 20–06–2011 |
| 7 | 118/2 | ಖಾಲಿಜಾಗ | 2109–75 | 20–06–2011 |
| 8 | 122 | ಸೈಟು | 722 | 20–06–2011 |
| 9 | 118/4 | ಸೈಟು | 420 | 20–06–2011 |

**P.R. 42**

**S.C. 10**

**ವಿಶೇಷ ಭೂಸ್ವಾಧೀನಾಧಿಕಾರಿ,**

ರಾಮನಗರ ಉಪ ವಿಭಾಗ, ರಾಮನಗರ.

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59